# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1386 (1592) |
| ವಿಧಾನ ಪರಿಷತ್ತಿನ ಸದಸ್ಯರ ಹೆಸರು | : | ಶ್ರೀ ಕೆ.ಎ.ತಿಪ್ಪೇಸ್ವಾಮಿ<br>(ನಾಮನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | : | 18-03-2021 |
| ಉತ್ತರಿಸುವವರು | : | ಮಾನ್ಯ ಯುವ ಸಬಲೀಕರಣ ಹಾಗೂ ಕ್ರೀಡೆ ಮತ್ತು ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕೇಂದ್ರ ಸರ್ಕಾರ 2021-ಜನಗಣತಿಯನ್ನು ಕೈಗೆತ್ತಿಕೊಳ್ಳಲು ಸೂಚನೆ ಹೊರಡಿಸಿದೆಯೇ; (ವಿವರ ನೀಡುವುದು) | 2021ರ ಜನಗಣತಿಯನ್ನು ಕೈಗೊಳ್ಳಲು ಕೇಂದ್ರ ಸರ್ಕಾರವು ದಿನಾಂಕ:26.03.2019ರಂದು ಅಧಿಸೂಚನೆಯನ್ನು ಹೊರಡಿಸಿದ್ದು, ನಂತರ, ದಿನಾಂಕ:30.03.2020ರ ಕೇಂದ್ರ ಸರ್ಕಾರದ ಪತ್ರದಲ್ಲಿ 2021ರ ಜನಗಣತಿಗೆ ಸಂಬಂಧಿಸಿದಂತೆ ಮೊದಲನೆ ಹಂತದಲ್ಲಿ ಕೈಗೊಳ್ಳಬೇಕಾದ ಎಲ್ಲಾ ಕಾರ್ಯಚಟುವಟಿಕೆಗಳನ್ನು ಕೋವಿಡ್-19ರ ಪರಿಣಾಮದಿಂದಾಗಿ ಮುಂದಿನ ಆದೇಶದವರೆಗೆ ಮುಂದೂಡಲ್ಪಟ್ಟಿದೆ. (ವಿವರದ ಪ್ರತಿ ಲಗತ್ತಿಸಿದೆ). |
| ಆ) | ರಾಜ್ಯ ಸರ್ಕಾರ 2021 ಜನಗಣತಿ ಅಂಗವಾಗಿ ಸಿದ್ಧಪಡಿಸಲಾಗುವ "ರಾಷ್ಟ್ರೀಯ ಜನಸಂಖ್ಯಾ ರಿಜಿಸ್ಟಾರ್" ಬಗ್ಗೆ ವಿಧಾನ ಮತ್ತು ಮಾರ್ಗದರ್ಶನಗಳನ್ನು ಕೇಂದ್ರ ಸರ್ಕಾರದ ನಿರ್ದೇಶನದಂತೆ ರೂಪಿಸಿ, ಅಂತಿಮಗೊಳಿಸಲಾಗಿದೆಯೇ; (ವಿವರ ನೀಡುವುದು) | "ರಾಷ್ಟ್ರೀಯ ಜನಸಂಖ್ಯಾ ರಿಜಿಸ್ಟಾರ್" ಬಗ್ಗೆ ವಿಧಾನ ಮತ್ತು ಮಾರ್ಗದರ್ಶನಗಳನ್ನು ಕೇಂದ್ರ ಸರ್ಕಾರವು ಸಿದ್ಧಪಡಿಸಿ ರಾಜ್ಯ ಸರ್ಕಾರಕ್ಕೆ ನೀಡಿದ್ದು ಅದರಂತೆ ರಾಜ್ಯ ಸರ್ಕಾರವು ಕ್ರಮವಹಿಸುತ್ತದೆ.<br>ಕೇಂದ್ರ ಸರ್ಕಾರವು ರೂಪಿಸಿರುವ ಮಾರ್ಗದರ್ಶನಗಳಿಗೆ ರಾಜ್ಯ ಸರ್ಕಾರವು ಪ್ರತ್ಯೇಕವಾಗಿ ಯಾವುದೇ ಮಾರ್ಗದರ್ಶನಗಳನ್ನು ರೂಪಿಸಿರುವುದಿಲ್ಲ. |
| ಇ) | 2011-ಜನಗಣತಿಯಲ್ಲಿ ಸಂಗ್ರಹವಾದ ಜಾತಿ ಅಂಕಿ-ಅಂಶಗಳನ್ನು ಬಿಡುಗಡೆ ಮಾಡಲಾಗಿದೆಯೇ; ಮತ್ತು<br><br>2021-ಜನಗಣತಿ ಅವಧಿಯಲ್ಲಿ ಜಾತಿ ಆಧಾರಿತ ಕುಟುಂಬಗಳ ಸಾಮಾಜಿಕ-ಆರ್ಥಿಕ ಗಣತಿ ನಡೆಸಲು ಉದ್ದೇಶಿಸಲಾಗಿದೆಯೇ; (ಸಂಪೂರ್ಣ ವಿವರ ನೀಡುವುದು) | 2011ರ ಜನಗಣತಿಯಲ್ಲಿ ಜಾತಿ ಅಂಕಿ ಅಂಶಗಳಿಗೆ ಸಂಬಂಧಿಸಿದಂತೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಜನಸಂಖ್ಯಾ ವಿವರಗಳನ್ನು ಮಾತ್ರ ಬಿಡುಗಡೆ ಮಾಡಲಾಗಿದೆ.<br><br>ಉದ್ದೇಶಿಸಿರುವುದಿಲ್ಲ. |

ಮುಂದುವರೆದಿದೆ...........

| | | |
|---|---|---|
| ಈ) | 2021-ಜನಗಣತಿಯಲ್ಲಿ ಮೊಟ್ಟ ಮೊದಲನೆಯದಾಗಿ Digital Census ನಡೆಸಲು ಉದ್ದೇಶಿಸಲಾಗಿದ್ದು, ಈ ಕಾರ್ಯಕ್ರಮ ಜಾರಿಗೆ ತರಲು ರಾಜ್ಯ ಸರ್ಕಾರಕ್ಕೆ ಕೇಂದ್ರ ಸರ್ಕಾರ ವಿವಿಧ ಕಾರ್ಯಕ್ರಮಗಳ ಅಡಿಯಲ್ಲಿ ಬಿಡುಗಡೆ ಮಾಡಿದ ಅನುದಾನವೆಷ್ಟು ಮತ್ತು ಇದರಲ್ಲಿ ಉಪಯೋಗಿಸಲಾದ ಹಣ ಎಷ್ಟು? (ವಿವರ ನೀಡುವುದು) | ಕೇಂದ್ರ ಸರ್ಕಾರವು ರಾಜ್ಯ ಸರ್ಕಾರಕ್ಕೆ ರೂ.26.16 ಕೋಟಿಗಳನ್ನು ಬಿಡುಗಡೆ ಮಾಡಿದ್ದು, ಇಲ್ಲಿಯವರೆಗೆ ರೂ.5.73 ಕೋಟಿಗಳನ್ನು ವೆಚ್ಚ ಮಾಡಲಾಗಿದೆ. |

**ಸಂಖ್ಯೆ: ಪಿಡಿಎಸ್ 14 ಎಸ್‌ಎಸ್‌ಎಂ 2021**

**(ಡಾ| ನಾರಾಯಣ. ಗೌಡ)**

ಯುವ ಸಬಲೀಕರಣ ಹಾಗೂ ಕ್ರೀಡೆ ಮತ್ತು ಯೋಜನೆ,

ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು